ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ಕೋವಿಡ್-19 ರ ಸಮಯದಲ್ಲಿ ಆಟೋ ಚಾಲಕರು ಮತ್ತು ಇತರರಿಗೆ ಸಹಾಯಧನ ನೀಡುವ ಬಗ್ಗೆ

ಶ್ರೀ ಮಾನೆ ಶ್ರೀನಿವಾಸ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

387 (347) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಕೋವಿಡ್-19 ಸಾಂಕ್ರಾಮಿಕ ರೋಗ ಹರಡಿ, ಲಾಕ್‌ಡೌನ್ ಘೋಷಣೆಗೊಂಡ ಸಮಯದಲ್ಲಿ, ದುಡಿಮೆಯಿಲ್ಲದೇ ಸಂಕಷ್ಟಕ್ಕೆ ಸಿಲುಕಿದ್ದ, ಟ್ಯಾಕ್ಸಿ ಚಾಲಕರು, ಆಟೋ ಚಾಲಕರು, ಕ್ಷೌರಿಕರು ಹಾಗೂ ಇನ್ನು ಮುಂತಾದ ಶ್ರಮಿಕ ವರ್ಗದವರಿಗೆ ರಾಜ್ಯ ಸರ್ಕಾರದಿಂದ ಸಹಾಯಧನವನ್ನು ಘೋಷಣೆ ಮಾಡಲಾಗಿದ್ದು, ಸದರಿ ಘೋಷಣೆಯ ಪ್ರಕಾರ ಗದಗ, ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಒಟ್ಟು ಎಷ್ಟು ಟ್ಯಾಕ್ಸಿ ಚಾಲಕರು, ಆಟೋ ಚಾಲಕರು, ಕ್ಷೌರಿಕರು ಹಾಗೂ ಇನ್ನುಳಿದ ಘೋಷಿತ ಶ್ರಮಿಕ ವರ್ಗದವರು ನೊಂದಾಯಿತರಾಗಿದ್ದಾರೆ ಅಲ್ಲದೇ ಎಷ್ಟು ಘೋಷಿತ ಶ್ರಮಿಕ ವರ್ಗದವರಿಗೆ ಸಹಾಯಧನವನ್ನು ನೀಡಲಾಗಿದೆ;

(ಆ) ಧಾರವಾಡ, ಗದಗ ಹಾಗೂ ಹಾವೇರಿ ಜಿಲ್ಲೆಯಲ್ಲಿ ಒಟ್ಟು ಎಷ್ಟು ಟ್ಯಾಕ್ಸಿ ಚಾಲಕರು, ಆಟೋ ಚಾಲಕರು, ಕ್ಷೌರಿಕರು ಹಾಗೂ ಇನ್ನುಳಿದ ಘೋಷಿತ ಶ್ರಮಿಕ ವರ್ಗದವರಿಗೆ ಸಹಾಯಧನ ನೀಡುವುದು ಬಾಕಿಯಿದೆ; ಬಾಕಿ ಉಳಿಯಲು ಕಾರಣಗಳೇನು;

(ಇ) ಎಲ್ಲ ನೋಂದಾಯಿತ ಟ್ಯಾಕ್ಸಿ ಚಾಲಕರು, ಆಟೋ ಚಾಲಕರು, ಕ್ಷೌರಿಕರು ಹಾಗೂ ಇನ್ನುಳಿದ ಘೋಷಿತ ಶ್ರಮಿಕ ವರ್ಗದವರಿಗೆ ಸಹಾಯಧನವನ್ನು ಬಿಡುಗಡೆಗೊಳಿಸಲಾಗುವುದು ಯಾವಾಗ?